## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 639 |
| ಸದಸ್ಯರ ಹೆಸರು | : | ಶ್ರೀ ಐವನ್ ಡಿ'ಸೋಜಾ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 11.03.2020. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಮತ್ತು<br>ಸಮಾಜ ಕಲ್ಯಾಣ ಇಲಾಖೆ |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಷ್ಟ್ರೀಯ ಹೆದ್ದಾರಿ 169ರ ಗುರುಪುರದಲ್ಲಿ ಪಾಲ್ಗುಣಿ ನದಿಗೆ ಅಡ್ಡಲಾಗಿ ಹೊಸ ಸೇತುವೆ ನಿರ್ಮಾಣ ಕಾಮಗಾರಿ ಎಂದು ಪೂರ್ಣಗೊಳ್ಳುವುದು; ಇದಕ್ಕೆ ತಗಲುವ ವೆಚ್ಚ ಎಷ್ಟು; (ವಿವರ ನೀಡುವುದು) | ರಾಷ್ಟ್ರೀಯ ಹೆದ್ದಾರಿ 169ರ ಗುರುಪುರದ ಬಳಿ ಕಿ.ಮೀ.735.80 ರಲ್ಲಿ ಪಾಲ್ಗುಣಿ ನದಿಗೆ ಅಡ್ಡಲಾಗಿ ಹೊಸ ಸೇತುವೆ ನಿರ್ಮಾಣ ಕಾಮಗಾರಿಯನ್ನು ರೂ.39.42 ಕೋಟಿ ವೆಚ್ಚದಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಸದರಿ ಸೇತುವೆ ನಿರ್ಮಾಣ ಕಾಮಗಾರಿಯನ್ನು ದಿನಾಂಕ:29-02-2019 ರಂದು ಪ್ರಾರಂಭಿಸಿದ್ದು, ಗುತ್ತಿಗೆ ಕರಾರಿನಲ್ಲಿ ಕಾಮಗಾರಿ ಪೂರ್ಣಗೊಳಿಸಲು 2 ವರ್ಷಗಳ ಕಾಲಮಿತಿಯನ್ನು ನಿಗದಿಗೊಳಿಸಲಾಗಿದೆ. |
| ಆ | ಸೇತುವೆಗೆ ಸಂಪರ್ಕ ರಸ್ತೆ ಕಲ್ಪಿಸಲು ಭೂಮಿಯನ್ನು ಸ್ವಾಧೀನಕ್ಕೆ ಪಡೆಯಲಾಗಿದೆಯೇ; ಕಾಮಗಾರಿ ವಿಳಂಬಗೊಳ್ಳುವುದರಿಂದ ಜನಾಕ್ರೋಶ ಉಂಟಾಗಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಸದರಿ ಸೇತುವೆ ನಿರ್ಮಾಣ ಕಾಮಗಾರಿಯ ಅಪ್ರೋಚ್/ ಸಂಪರ್ಕ ರಸ್ತೆಗೆ ಭೂಸ್ವಾಧೀನ ಪ್ರಕ್ರಿಯೆ 3(D) ಗೆಜೆಟ್ ನೋಟೀಫಿಕೇಶನ್‌ನ್ನು ಭಾರತ ಸರಕಾರವು ಗೆಜೆಟ್ ಅಧಿಸೂಚನೆಯಲ್ಲಿ ದಿನಾಂಕ: 01.02.2020 ರಂದು ಪ್ರಕಟಣೆ ಮಾಡಿರುತ್ತದೆ. ಸದರಿ ಕಾಮಗಾರಿಯ ಭೂಸ್ವಾಧೀನದ ಮುಂದುವರಿದ ಪ್ರಕ್ರಿಯೆಯಾದ 3(G) ಬಗ್ಗೆ ಭೂಮಿ ಕಳೆದುಕೊಂಡ ಭೂಮಾಲೀಕರ ದಾಖಲೆಗಳನ್ನು ದಿನಾಂಕ: 27.02.2020 ರಂದು ವಿಶೇಷ ಭೂಸ್ವಾಧೀನ ಅಧಿಕಾರಿಗಳು ಹಾಗೂ ಸರ್ವೆಯರ್‌ಗಳು ಪರಿಶೀಲಿಸಿರುತ್ತಾರೆ. ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಂಡ ತಕ್ಷಣ ಸಂಪರ್ಕ ರಸ್ತೆ ಕಾಮಗಾರಿಯನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸಲಾಗುವುದು. |
| ಇ | ಹೆದ್ದಾರಿ 169ರ ಗುರುಪುರ ಪಾಲ್ಗುಣಿ ನದಿಗೆ ಅಡ್ಡಲಾಗಿ ಪ್ರಸ್ತುತ ಇರುವ ಸೇತುವೆಯು ತೀರಾ ಅಪಾಯದಲ್ಲಿದ್ದು, ಹೊಸ ಸೇತುವೆ ನಿಮಾಣ ವಿಳಂಬಗೊಳ್ಳುತ್ತಿರುವುದನ್ನು ಸರ್ಕಾರ ಗಮನಿಸಿ ಕೂಡಲೇ ವಾಹನ ಸಂಚಾರಕ್ಕೆ ಅನುಕೂಲ ಮಾಡಿ ಕೊಡುವುದೇ? (ವಿವರ ನೀಡುವುದು) | ಪ್ರಸ್ತಾಪಿತ ಸೇತುವೆ ನಿರ್ಮಾಣ ಕಾಮಗಾರಿಯ ಪ್ರಗತಿಯು ತ್ವರಿತಗತಿಯಲ್ಲಿದ್ದು, ಸೇತುವೆ ಕಾಮಗಾರಿಯನ್ನು ಅತೀ ಜರೂರಾಗಿ ಪೂರ್ಣಗೊಳಿಸುವುದು ಅತ್ಯವಶ್ಯಕವಾಗಿರುತ್ತದೆ. ಆದ್ದರಿಂದ, ಸದರಿ ಸೇತುವೆ ಕಾಮಗಾರಿಯನ್ನು ಮೇ 2020ರ ಅಂತ್ಯದೊಳಗೆ ಪೂರ್ಣಗೊಳಿಸಿ ವಾಹನ ಸಂಚಾರಕ್ಕೆ ಅನುಕೂಲ ಮಾಡಿಕೊಡಲಾಗುವುದು. |

ಕಡತ ಸಂಖ್ಯೆ: ಲೋಇ 44 ಸಿಬಿಆರ್ 2020 (ಇ)

(ಗೋವಿಂದ.ಎಂ.ಕಾರಜೋಳ)
ಉಪ ಮುಖ್ಯಮಂತ್ರಿ
ಲೋಕೋಪಯೋಗಿ ಮತ್ತು
ಸಮಾಜ ಕಲ್ಯಾಣ ಇಲಾಖೆ